## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 410 |
| ಸದಸ್ಯರ ಹೆಸರು | : | ಶ್ರೀ ಕೆ.ಎ.ತಿಪ್ಪೇಸ್ವಾಮಿ ( ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 15-12-2021 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 1986 ರಿಂದ ಇಲ್ಲಿಯವರೆಗೆ 11 ಹೊಸ ಜಿಲ್ಲೆಗಳು ಮತ್ತು 50 ತಾಲ್ಲೂಕುಗಳನ್ನು ರಚಿಸಿದ್ದು, ಈ ಜಿಲ್ಲೆಗಳಲ್ಲಿ ವಿವಿಧ ಇಲಾಖೆಗಳಿಗೆ ಅಗತ್ಯವಿರುವ ಮೂಲ ಸೌಕರ್ಯಗಳಾದ ಕಛೇರಿ ಕಟ್ಟಡಗಳು, ಕುಡಿಯುವ ನೀರು, ಶೌಚಾಲಯ,ವಿದ್ಯುಚ್ಛಕ್ತಿ ಮುಂತಾದವುಗಳನ್ನು ಕಲ್ಪಿಸಲು ರಾಜ್ಯ ಸರ್ಕಾರ ವಿಫಲವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ.<br>ರಾಜ್ಯದಲ್ಲಿ ಹೊಸದಾಗಿ ರಚನೆಯಾದ ಜಿಲ್ಲೆಗಳಿಗೆ ಜಿಲ್ಲಾಮಟ್ಟದಲ್ಲಿ ಜಿಲ್ಲಾ ಸಂಕೀರ್ಣ ಕಟ್ಟಡ ಹಾಗೂ ತಾಲ್ಲೂಕು ಮಟ್ಟದಲ್ಲಿ ಹೊಸದಾಗಿ ರಚನೆಯಾದ ತಾಲ್ಲೂಕುಗಳಿಗೆ ತಾಲ್ಲೂಕು ಆಡಳಿತ ಸೌಧ ಕಟ್ಟಡಗಳನ್ನು ನಿರ್ಮಿಸುವಾಗ ಕಡ್ಡಾಯವಾಗಿ ಕಟ್ಟಡಕ್ಕೆ ಬೇಕಾದ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರು, ಪೀಠೋಪಕರಣ, ಒಳಾಂಗಣ ವಿನ್ಯಾಸ, ವಿದ್ಯುಚ್ಛಕ್ತಿ ಸೌಲಭ್ಯ, ಶೌಚಾಲಯ, ಲಿಫ್ಟ್ ಅಳವಡಿಕೆ ಇನ್ನಿತರೆ ಎಲ್ಲಾ ಪೂರಕ ಸೌಲಭ್ಯಗಳನ್ನು ಒಳಗೊಂಡಂತೆ ಜಿಲ್ಲಾ ಸಂಕೀರ್ಣ ಕಟ್ಟಡಕ್ಕೆ ರೂ. 25.00 ಕೋಟಿ ಹಾಗೂ ತಾಲ್ಲೂಕು ಆಡಳಿತ ಸೌಧಕ್ಕೆ ರೂ.10.00 ಕೋಟಿಗಳಲ್ಲಿ ನಿರ್ಮಿಸಲು ಅವಕಾಶ ಕಲ್ಪಿಸಲಾಗಿದೆ. |
| ಆ) | ಹಾಗಿದಲ್ಲಿ, ಮೂಲಸೌಕರ್ಯಗಳನ್ನು ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | |
| ಇ) | ಕೆಲವೊಂದು ಜಿಲ್ಲೆಗಳಲ್ಲಿ ಮತ್ತು ತಾಲ್ಲೂಕುಗಳಲ್ಲಿ ಕೇವಲ ಜಿಲ್ಲಾಧಿಕಾರಿ, ಜಿಲ್ಲಾ ಪಂಚಾಯತ್, ತಾಲ್ಲೂಕು ಮತ್ತು ತಾಲ್ಲೂಕು ಪಂಚಾಯತ್ ಕಛೇರಿಗಳನ್ನು ಮಾತ್ರ ತೆರೆದಿದ್ದು, | ಹೌದು |

| | | |
|---|---|---|
| | ಇತರೆ ಇಲಾಖೆಯ ಜಿಲ್ಲಾ ಕಛೇರಿ ಮತ್ತು ತಾಲ್ಲೂಕು ಕಛೇರಿಯನ್ನು ತೆರೆಯದೆ ಇರುವುದರಿಂದ ಸಾರ್ವಜನಿಕರು ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಈ) | ಹಾಗಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ನೂತನ ಜಿಲ್ಲೆಗಳಲ್ಲಿ (ವಿಜಯನಗರ ಜಿಲ್ಲೆ ಹೊರತುಪಡಿಸಿ) ಜಿಲ್ಲಾಧಿಕಾರಿಗಳ ಕಚೇರಿ, ಜಿಲ್ಲಾ ಪಂಚಾಯತ್ ಕಚೇರಿ ಸೇರಿದಂತೆ ಪ್ರಮುಖ ಜಿಲ್ಲಾ ಮಟ್ಟದ ಕಚೇರಿಗಳು ಪ್ರಾರಂಭವಾಗಿರುತ್ತವೆ. ಆದಾಗ್ಯೂ ಇನ್ನೂ ಪ್ರಾರಂಭವಾಗಿಲ್ಲದ ಜಿಲ್ಲಾ ಮಟ್ಟದ ಕಚೇರಿಗಳನ್ನು ಅವಶ್ಯಕತೆಯನ್ನು ಆಧರಿಸಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ತೆರೆಯಲು ಕ್ರಮ ವಹಿಸಲಾಗುವುದು.<br>ಮುಂದುವರಿದು, ಹೊಸ ತಾಲ್ಲೂಕುಗಳಲ್ಲಿ ಮೊದಲಿಗೆ ತಹಸೀಲ್ದಾರ್ ಕಚೇರಿ ಹಾಗೂ ತಾಲ್ಲೂಕು ಪಂಚಾಯತಿ ಕಚೇರಿಗಳನ್ನು ಪ್ರಾಂಭಿಸಲಾಗುತ್ತಿದೆ. ಇನ್ನುಳಿದ ಪ್ರಮುಖ ಇಲಾಖೆಗಳ ತಾಲ್ಲೂಕು ಮಟ್ಟದ ಕಛೇರಿಗಳನ್ನು ಅಗತ್ಯತೆಯನ್ನು ಪರಿಗಣಿಸಿ ಪ್ರಾರಂಭಿಸಲು ಇಲಾಖಾ ಮುಖ್ಯಸ್ಥರಿಗೆ ಕಾಲಕಾಲಕ್ಕೆ ಸೂಚನೆಗಳನ್ನು ನೀಡಲಾಗಿದೆ. ಇತ್ತೀಚೆಗೆ ದಿನಾಂಕ:15.09.2021 ರಂದು ಸಚಿವಾಲಯದ ಎಲ್ಲಾ ಇಲಾಖೆಗಳ ಸರ್ಕಾರದ ಅಪರ ಮುಖ್ಯ/ಪ್ರಧಾನ/ಕಾರ್ಯದರ್ಶಿಗಳಿಗೆ ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಂದ ಅರೆ ಸರ್ಕಾರಿ ಪತ್ರ ಬರೆದು, ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹೊಸ ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟದ ಕಛೇರಿಗಳನ್ನು ಪ್ರಾರಂಭಿಸಲು ಅಗತ್ಯ ಕ್ರಮ ಕೈಗೊಳ್ಳುವಂತೆ ತಿಳಿಸಲಾಗಿದೆ. ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಸಹ ಈ ಬಗ್ಗೆ ನಿರ್ದೇಶನ ನೀಡಲಾಗಿರುತ್ತದೆ. ಅದರಂತೆ ಹೊಸ ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟದ ಕಚೇರಿಗಳನ್ನು ಹಂತ-ಹಂತವಾಗಿ ಪ್ರಾರಂಭಿಸಲಾಗುವುದು. |
| ಉ) | ರಾಜ್ಯವು ಈ ಹೊಸ ಜಿಲ್ಲೆ ಮತ್ತು ತಾಲ್ಲೂಕುಗಳನ್ನು ರಚನೆ ಮಾಡುವ ಮುನ್ನ ಕೇಂದ್ರ ಸರ್ಕಾರದ ಅನುಮತಿ ಪಡೆಯುವುದು ಅವಶ್ಯವಲ್ಲವೆ; ಹಾಗಿದ್ದಲ್ಲಿ, ಈ ಎಲ್ಲ | ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ಕಲಂ 4 (4) ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಹಾಗೂ ಕಲಂ 6 ರಲ್ಲಿ ನಿರ್ದಿಷ್ಟಪಡಿಸಿರುವ ವಿಧಾನವನ್ನು ಅನುಸರಿಸಿ ರಾಜ್ಯ ಸರ್ಕಾರವು ಹೊಸ ಜಿಲ್ಲೆ ಮತ್ತು ತಾಲ್ಲೂಕುಗಳನ್ನು ರಚಿಸಬಹುದಾಗಿದೆ. ಹೀಗಾಗಿ ಇಂತಹ ಪ್ರಸ್ತಾವನೆಗಳಿಗೆ ಕೇಂದ್ರ ಸರ್ಕಾರದ ಅನುಮತಿ ಪಡೆಯುವ ಅವಶ್ಯಕತೆ ಇರುವುದಿಲ್ಲ. |

<table>
<tr><td></td><td>ಸೌಲಭ್ಯಗಳನ್ನು ಪಡೆಯಲಾಗಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು)</td><td></td></tr>
<tr><td>ಊ)</td><td>ರಾಜ್ಯದಲ್ಲಿ ರಚಿತವಾಗಿರುವ ಹೊಸ ಜಿಲ್ಲೆ ಮತ್ತು ಹೊಸ ತಾಲ್ಲೂಕುಗಳಲ್ಲಿ ಮೂಲಸೌಕರ್ಯ ಕಲ್ಪಿಸಲು, ಕಂದಾಯ ಮತ್ತು ಸರ್ವೆ ದಾಖಲೆಗಳನ್ನು ಇಂಡೀಕರಿಸಲು ಕಂಪ್ಯೂಟರೈಸ್ ಮಾಡಲು ಕೇಂದ್ರ ಸರ್ಕಾರ ಅನುದಾನ ನೀಡುತ್ತಿದೆಯೇ; ಹಾಗಿದ್ದಲ್ಲಿ, ಕೇಂದ್ರ ಸರ್ಕಾರದಿಂದ ವಿವಿಧ ಯೋಜನೆ ಅಡಿ ನೀಡುತ್ತಿರುವ ಅನುದಾನ ಮತ್ತು ಆರ್ಥಿಕ ನೆರವು ಎಷ್ಟು? (ಸಂಪೂರ್ಣ ಮಾಹಿತಿ ನೀಡುವುದು)</td><td>ನೂತನ ಜಿಲ್ಲೆ ಹಾಗೂ ತಾಲ್ಲೂಕುಗಳಲ್ಲಿ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಒಳಗೊಂಡಂತೆ ಜಿಲ್ಲಾ ಸಂಕೀರ್ಣ ಕಟ್ಟಡಕ್ಕೆ ರೂ. 25.00 ಕೋಟಿ ಹಾಗೂ ತಾಲ್ಲೂಕು ಆಡಳಿತ ಸೌಧಕ್ಕೆ ರೂ.10.00 ಕೋಟಿಗಳಲ್ಲಿ ನಿರ್ಮಿಸಲು ಅವಕಾಶ ಕಲ್ಪಿಸಲಾಗಿದೆ. ಮುಂದುವರಿದು, ಹೊಸ ತಾಲ್ಲೂಕುಗಳು ಆಡಳಿತ ಪ್ರಕ್ರಿಯೆಯನ್ನು ಪ್ರಾರಂಭಿಸಲು ಹಾಗೂ ಕಾರ್ಯಾರಂಭ ಮಾಡಲು ಕಂದಾಯ ಇಲಾಖೆಯಿಂದ ಪ್ರತೀ ತಾಲ್ಲೂಕಿಗೆ 2018-19 ನೇ ಸಾಲಿನಿಂದ ರೂ.25.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದೆ. ಪ್ರಸಕ್ತ ಸಾಲಿನಲ್ಲಿ ಮೊದಲ ಕಂತಿನಲ್ಲಿ ರೂ.1.75 ಲಕ್ಷಗಳನ್ನು ಬಿಡುಗಡೆಗೊಳಿಸಿದ್ದು, ಎರಡನೇ ಕಂತಿನ ಅನುದಾನ ಬಿಡುಗಡೆ ಗೊಳಿಸಲಾಗುವುದು.<br>ಕಂದಾಯ ಮತ್ತು ಸರ್ವೇ ದಾಖಲೆಗಳನ್ನು ಈಗಾಗಲೇ ಗಣಕೀಕರಣಗೊಳಿಸಲಾಗಿದೆ. NLRMP / DILRMP ಅಡಿಯಲ್ಲಿ ನೀಡಿದ ಅನುದಾನದಿಂದ ಈ ಕೆಳಕಂಡಂತೆ ಸರ್ವೇ ದಾಖಲೆಗಳಾದ
<table>
<tr><th>ಕ್ರ.ಸಂ</th><th>ವಿವರ</th></tr>
<tr><td>1</td><td>ಸಂರಕ್ಷಿತ ಪ್ರತಿ ಪುಸ್ತಕ</td></tr>
<tr><td>2</td><td>ಎರಡನೇ ರೀಕ್ಲಾಸಿಫಿಕೇಷನ್ ಪ್ರತಿ ಪುಸ್ತಕ</td></tr>
<tr><td>3</td><td>ಸಂರಕ್ಷಿತ ಪ್ರತಿ</td></tr>
<tr><td>4</td><td>ಎಫ್.ಎಂ.ಬಿ.</td></tr>
<tr><td>5</td><td>ಹಿಸ್ಸಾ ಸರ್ವೆ ಟಿಪ್ಪಣಿ ಪುಸ್ತಕ</td></tr>
<tr><td>6</td><td>ಖಾಯಂದರ ತ:ಖ್ತೆ</td></tr>
<tr><td>7</td><td>ಫೂಟ್ ಪ್ಲಾಟ್</td></tr>
<tr><td>8</td><td>ಮೂಲ ಸರ್ವೆ ಟಿಪ್ಪಣಿ ಪುಸ್ತಕ</td></tr>
<tr><td>9</td><td>ಮೂಲ ಸರ್ವೆ ಪಕ್ಕಾ ಪುಸ್ತಕ</td></tr>
<tr><td>10</td><td>ಮೂಲ ಸರ್ವೆ ಪ್ರತಿ ಪುಸ್ತಕ</td></tr>
<tr><td>11</td><td>ರಿವಿಜನ್ ಪುಸ್ತಕ</td></tr>
<tr><td>12</td><td>ಫಾರಂ ನಂ-10</td></tr>
<tr><td>13</td><td>ಹಿಸ್ಸಾ ಸರ್ವೆಪುಸ್ತಕ (ಪೋಡಿ)</td></tr>
<tr><td>14</td><td>ಪೋಡಿ ಟಿಪ್ಪಣಿ (ಕಾಲೋಚಿತಗೊಳಿಸಿದ್ದು)</td></tr>
<tr><td>15</td><td>ಹಿಸ್ಸಾ ಸರ್ವೆ ಪೋಡಿ ಟಿಪ್ಪಣಿ</td></tr>
<tr><td>16</td><td>ರೀಸರ್ವೆ ಪ್ರತಿ ಪುಸ್ತಕ</td></tr>
<tr><td>17</td><td>ಹಿಸ್ಸಾ ಸರ್ವೆ ಪುಸ್ತಕ (ವೋಚರ್)</td></tr>
</table></td></tr>
</table>

| | | | |
|---|---|---|---|
| | | 18 | ಎ ದಫ್ತರ್ ಫಾರಂ ನಂ-10 |
| | | 19 | ಎ ದಫ್ತರ್ ಫಾರಂ ರಿವಿಜನ್ ಪಕ್ಕಾ ಪುಸ್ತಕ |
| | | 20 | ಎ ದಫ್ತರ್ ರಿವಿಜನ್ ಪ್ರತಿ |
| | | 21 | ಬಿ ದಫ್ತರ್ ರೆವಿನ್ಯೂ ಟಿಪ್ಪಣಿ |
| | | 22 | ಬಿ ಸರ್ವೆ ಫಾರಂ ನಂ-4 |
| | | 23 | ಕಮ್ಮಿ ಜಾಸ್ತಿ ಪತ್ರಿಕೆ |
| | | 24 | ಬಿ ದಫ್ತರ್ ಹಿಸ್ಸಾ ಫಾರಂ ನಂ-3 |
| | | 25 | ಫೂಟ್ ಬುಕ್ |
| | | 26 | ಬಿ ದಫ್ತರ್ ನಕಲು ಟಿಪ್ಪಣಿ |
| | | 27 | ಎ.ಪಿ.ಟಿ.ಶೀಟ್ಸ್ |
| | | 28 | ಬಿ.ಪಿ.ಟಿ.ಶೀಟ್ಸ್ |
| | | 29 | ಕೆ.ಜೆ.ಪಿ. |
| | | ಆಕಾರಬಂದ ಗಣಕೀಕರಣಗೊಳಿಸಲಾಗಿದೆ. DILRMP ಯೋಜನೆಯಡಿಯಲ್ಲಿ ಕೇಂದ್ರ ಸರ್ಕಾರವು ರೂ. 2451.20 ಲಕ್ಷಗಳ ಅನುದಾನವನ್ನು ನೀಡಿದೆ. | |

**ಸಂಖ್ಯೆ: ಕಂಇ 141 ಡಬ್ಲ್ಯೂ ಬಿಆರ್ 2021**

**(ಆರ್. ಅಶೋಕ)**

ಕಂದಾಯ ಸಚಿವರು.